ಎನ್. ಸಿ. ಕ್ರಿಸ್ತಾಯಿಯವರು
ಬರೆದ
"ಸಾಮಂತವಾದಿ ಚಿಂತನೆಗಳು"
ಲೇಖನ.
ಉದಯವಾಣಿ' ದೀಪಾವಳಿ ಸಂಚಿಕೆ



# ಸಾವಂತವಾಡಿಯ ಚಿತಾರಿಗಳು

★ಎಸ್. ಸಿ. ದೇಸಾಯಿ



ಶ್ರೀ ಪುಂಡಲೀಕ ಚಿತಾರಿ, ಗಂಜೀಫಾ ಎಲೆಗಳನ್ನು ಚಿತ್ರಿಸಿದ ಕೊನೆಯ ಚಿತ್ರಕಾರ. 85ರ ಅಂಚಿನಲ್ಲಿದ್ದರೂ ಹಿಂದಿನ ಸಂದರ್ಭ ನೆನಪಿಸಿಕೊಂಡಾಗ 30ರ ಹುರುಪು.

ಮರಾಠಿ ಭಾಷೆಯಲ್ಲಿ 'ಚಿತಾರಿ' ಎಂದರೆ, ಚಿತ್ರಕಾರರು ಎಂದು ಅರ್ಥವಾಗುತ್ತದೆ, ಆದರೆ ಈ ಶಬ್ದ ಕೇವಲ 'ಸಾವಂತವಾಡಿಯಲ್ಲಿಯ ಚಿತ್ರಕಾರರು' ಎಂಬ ಅರ್ಥದಲ್ಲಿ ರೂಢವಾಗಿದೆ. ಈ ಶಬ್ದಕ್ಕೂ ಅಲ್ಲಿಯ ಚಿತ್ರಕಾರರಿಗೂ ಅಷ್ಟು ನಂಟು.

ಈ ಊರಲ್ಲಿಯೇ ಈ ವಿಶಿಷ್ಟ ರೀತಿಯ ಚಿತ್ರಕಲೆ ಹೇಗೆ ಮೊದಲಾಯಿತು, ಎಂದು ಶೋಧಿಸ ಹೊರಟರೆ, ಅದರ ಮೂಲ ಹೀಗೆಯೇ ಎಂದು ಹೇಳುವದು ಸ್ವಲ್ಪ ಕಷ್ಟದ ಮಾತೇ. ಆದರೆ ಒಂದು ಮಾತನ್ನು ಮರೆಯುವಂತಿಲ್ಲ. ಸಾವಂತವಾಡಿಯು ಒಂದು ಚಿಕ್ಕ ಸಂಸ್ಥಾನವಾಗಿತ್ತು. ಅಲ್ಲಿಯ ರಾಜಮನೆತನದವರ ಪ್ರೋತ್ಸಾಹವೇ ಈ ಕಲೆಗೆ ನೀರೆರೆಯಿತು ಎಂಬುದು ಮಾತ್ರ ನಿರ್ವಿವಾದ.

ಕಲೆ ಯಾವದೇ ಇರಲಿ ಸುತ್ತಮುತ್ತಲಿನ ವಾತಾವರಣ ಅದಕ್ಕೆ ಉತ್ಸಾಹವನ್ನು ನೀಡುತ್ತದೆ. ಕಲೆ ಬೆಳೆಯುತ್ತದೆ, ಚಿತ್ರಕಲೆಯ ಬೆಳವಣಿಗೆಗೆ ನಿಸರ್ಗ ಒಂದು ಮೂಲ ಕೊಡುಗೆ. ಸಾವಂತವಾಡಿ ಸಹ್ಯಾದ್ರಿಯ ಅಂಚಿನಲ್ಲಿರುವ ಊರು, ಅಲ್ಲಿಯ ಗಿಡ ಮರ, ಗಿರಿ ಕಂದರಗಳು ಎಂತಹನ ಮನಸ್ಸನ್ನೂ ಸೂರೆ ಮಾಡುವ ನಿಸರ್ಗವನ್ನು ನಿರ್ಮಿಸುತ್ತವೆ. ನೋಟಕ ಆನಂದದಲ್ಲಿ ಮುಳುಗುತ್ತಾನೆ. ಇಂಥ ವಾತಾವರಣವೇ ಈ ಚಿತಾರಿಗಳ ನಿರ್ಮಾಣಕ್ಕೆ ಆದಿಯಾಗಿರಬಹುದಲ್ಲವೆ?

ಇಲ್ಲಿ. ಈ ಚಿತ್ರಕಲೆ ಬೆಳೆದುಬಂದುದು ಕೆಲವೊಂದೇ ಮನೆತನಗಳಲ್ಲಿ ಮಾತ್ರ. ಹೆಚ್ಚಾಗಿ ಅವರೆಲ್ಲ ಒಂದೇ ಓಣಿಯಲ್ಲಿಯೇ ವಾಸವಾಗಿದ್ದಾರೆ, ಎಂತಲೇ ಆ ಓಣಿ, 'ಚಿತಾರಿ ಆಳಿ' ಎಂದು ಕರೆಯಲ್ಪಡುತ್ತದೆ. (ಮರಾಠಿಯಲ್ಲಿ 'ಆಳಿ' ಎಂದರೆ ಗಲ್ಲಿ – ಓಣಿ) ಈ

ಮನೆತನಗಳಲ್ಲಿ ಇದು ವಂಶಪರಂಪರೆಯಿಂದಬಂದಿದೆ.

ಇವರಲ್ಲಿಯ ಕುಶಲತೆಯನ್ನು ಕಂಡು ಅಂದಿನ ಅಲ್ಲಿಯ ಆಳರಸರು – ಘೋರ್ಪಡೆ ಮನೆತನ – ಇವರಲ್ಲಿಯ ಕುಶಲತೆಗೆ ಒಂದು ಉದ್ಯೋಗದ ರೂಪ ಕೊಟ್ಟು ಪ್ರೋತ್ಸಾಹಿಸಲು ಪ್ರಯತ್ನಿಸಿದರು.



ಅಕೇರಿಯಲ್ಲಿಯ ದಶಾವತಾರ ಭಿತ್ತಿಚಿತ್ರ. ಚಿತ್ರ: ಪ್ರಾ। ಪರೇಶ ದರು

ಕೆಲ ದಶಕಗಳ ಹಿಂದೆ 'ಗಂಜಿಫಾ' ಆಟ ಜನಪ್ರಿಯವಾಗಿತ್ತು. 'ಗಂಜಿಫಾ' ಅಂದರೆ ಇಂದಿನ ಪೀಳಿಗೆಗೆ ಅರ್ಥವಾಗುವದೂ ಕಷ್ಟ. ಗಂಜಿಫಾ, ಇಸ್ಪೀಟ ತರಹ ಎಲೆ(ಕಾರ್ಡು)ಗಳ ಆಟ. ಇಸ್ಪೀಟಿನಲ್ಲಿರುವಂತೆ ಕಳಾವರ, ಕುಂಬಳ, ಚೌಕ ಚಿತ್ರ ಮತ್ತು ಅಂಕಿಗಳಿರುವದಿಲ್ಲ. ಗಂಜಿಫಾ ಎಲೆಗಳನ್ನು ಗುರುತಿಸುವುದು ಚಿತ್ರಗಳಿಂದಲೇ. ಈ ಚಿತ್ರಗಳೆಲ್ಲ 'ದಶಾವತಾರ' ವಿಷಯಕ್ಕೇ ಹೆಚ್ಚಾಗಿ ಸಂಬಂಧಿಸಿದ್ದಾಗಿರುತ್ತಿದ್ದವು. ಈ ಗಂಜಿಫಾ ಎಲೆಗಳು ಅಚ್ಚಾದುವಲ್ಲ, ಕೈಯಿಂದಲೇ ಚಿತ್ರಿಸಿದ್ದವಾಗಿರುತ್ತಿದ್ದವು. ಎಂತಲೇ ಈ ಚಿತಾರಿಗಳಿಗೊಂದು ಉದ್ಯೋಗದ ಹಾದಿಯಾಗಿ ಕಲೆಯ ರೀತಿ ಕವಲೊಡೆದು ವಿವಿಧ ರೀತಿಯಲ್ಲಿ ಬೆಳೆಯಲು ಸೌಕರ್ಯ ಒದಗಿ ಬಂತು.

ಗಂಜಿಫಾ, ಶ್ರೀಮಂತ ಮನೆತನದವರು, ರಾಜಮಹಾರಾಜರು ಮನರಂಜನೆಗೆ ಆಡುವ ಆಟವಾಗಿತ್ತು, ಹೀಗಾಗಿ ತಮ್ಮಲ್ಲಿರುವ ಕಾರ್ಡು, ಬೇರೊಬ್ಬರಲ್ಲಿರುವುದಕ್ಕಿಂತಲೂ ಚೆನ್ನಾಗಿರಬೇಕು, ಕಲಾಪೂರ್ಣವಾಗಿರಬೇಕೆಂಬ ಹಂಬಲ ಸಹಜವಾಗಿಯೇ ಇರುತ್ತಿತ್ತು. ಈ ಇಚ್ಛೆಯೇ ಕಲಾವಿದರಿಗೊಂದು ಪ್ರೋತ್ಸಾ

ಚಿತಾರಿಗಳು ಇಂದಿಗೂ ತೆಂಗಿನ ಚಿಪ್ಪುಗಳನ್ನೆ ಬಣ್ಣದ ತಟ್ಟೆಯಾಗಿ ಉಪಯೋಗಿಸುತ್ತಾರೆ.

ಚಿತ್ರ: ಪ್ರಾ। ಪರೇಶ ದರು





ಆಕೇರಿ ದೇವಸ್ಥಾನದ ಒಂದು ನೋಟ. ಚಿತ್ರ: ಶ್ರೀ ಪಾಲ್ ಕೋಲಿ

ಹನವೂ ಆಗಿತ್ತು, ಅಂತಲೇ ಈ ಎಲೆಗಳು ವಿವಿಧ ರೀತಿಯಲ್ಲಿ ಕಲಾಪೂರ್ಣವಾಗಿ ಹೊರಬೀಳುತ್ತಿದ್ದವು.

ಎಲೆಗಳನ್ನು, ಅಂದು ಲಭ್ಯವಿದ್ದ ಕೈಕಾಗದ, ಬಟ್ಟೆ, ಚರ್ಮ, ಹಾಗೂ ವಿಶಿಷ್ಟ ಮರದ ಕಟ್ಟಿಗೆಯಿಂದ ಹಾಳೆ ಅಷ್ಟು ತೆಳುವಾಗಿ ಮಾಡಿದ ಕಟ್ಟಿಗೆ ಕಾಗದ ಇವುಗಳ ಮೇಲೆ ಚಿತ್ರಿಸಲಾಗುತ್ತಿತ್ತು. ಈ ಚಿತಾರಿಗಳ ಇನ್ನೊಂದು ವಿಶೇಷವೆಂದರೆ ಬಣ್ಣ, ಕುಂಚ ಮುಂತಾದ ಚಿತ್ರಸಾಧನಗಳನ್ನೆಲ್ಲ, ಇವರೇ ತಯಾರಿಸಿ ಕೊಳ್ಳುತ್ತಿದ್ದರು. ಇದೇ ಸಂಪ್ರದಾಯ ಇದುವರೆಗೂ ನಡೆದು ಬಂದಿರುವುದು ಇನ್ನೊಂದು ವಿಶೇಷವೇ!

ಇಸ್ಪೀಟು ಆಟ ಇಂದು ಮನರಂಜನೆಯಿಂದ ಹೆಡ್ಡದಾಟವಾಗಿದೆ. ಅಂದು ಮನರಂಜನೆಗಾಗಿ ಗಂಜಿಫಾ ಆಡಿದರೂ, ಅದು ದೇವರ ಸಾನ್ನಿಧ್ಯದಲ್ಲಿಯೇ ನಡೆಯುತ್ತಿತ್ತು, ಮನರಂಜನೆಯೊಂದಿಗೆ ಮನಸ್ಸು ಆಧ್ಯಾತ್ಮದ ಮೆಲುಕು ಹಾಕುತ್ತಿತ್ತು. ದಶಾವತಾರ, ನವಗ್ರಹ ಸಂದರ್ಭದ ಚಿತ್ರಗಳು ಕೈಯಲ್ಲಿ ಕುಣಿಯುತ್ತಿದ್ದುವು. ಇಸ್ಪೀಟು ನಿರ್ಮಾಣಕ್ಕೆ ಗಂಜಿಫಾವೇ ಸ್ಫೂರ್ತಿ ಎಂದೂ ಹೇಳಲಾಗುತ್ತಿದೆ. ಮೊದಲು ಬಂದ ವಿದೇಶೀಯರು ಗಂಜಿಫಾ ತಮ್ಮ ದೇಶಕ್ಕೆ ಒಯ್ದರು. ಅದೇ ಇಸ್ಪೀಟು ನಿರ್ಮಾಣಕ್ಕೆ ಹಾದಿಯಾಗಿದೆ ಎಂದು ಹೇಳಲಾಗುತ್ತಿದೆ.

ಈ ಗಂಜಿಫಾ ಚಿತ್ರಕ್ಕೇ ಅವರ ಕೌಶಲ್ಯ ನಿಲ್ಲಲಿಲ್ಲ. ಉತ್ತಮ ಭಿತ್ತಿ ಚಿತ್ರಗಳೂ ಅವರಿಂದ ನಿರ್ಮಾಣವಾಗಿವೆ. ಅವರು ಕಟ್ಟಿಗೆ ಕೆತ್ತನೆಯ ಕೆಲಸವನ್ನು ಉತ್ಕೃಷ್ಟವಾಗಿ ನಿರ್ವಹಿಸಬಲ್ಲರು. ಶಿಲಾ ಕೆತ್ತನೆಯಲ್ಲೂ ಅವರು ನಿಪುಣರು.

ಸಾವಂತವಾಡಿಯಿಂದ ನಾಲ್ಕು ಮೈಲು ದೂರ ವಿರುವ ಆಕೇರಿ ಎಂಬ ಹಳ್ಳಿಯಲ್ಲಿ ಶ್ರೀ ದೇವ ರಾಮೇಶ್ವರ ದೇವಸ್ಥಾನವಿದೆ, ಅದು ಸಾವಂತವಾಡಿಯ ರಾಜಮನೆತನದವರಿಂದಲೇ ನಿರ್ಮಾಣವಾಗಿದ್ದು, ಈ ದೇವಸ್ಥಾನದ ಕತೆ ಇಂತಿದೆ: ರಾಜಮನೆತನದಲ್ಲಿ ಒಬ್ಬ ರಾಜನಿಗೆ ಸಂತಾನವಿರಲಿಲ್ಲ. ಈ ದೇವ ರಾಮೇಶ್ವರ ದೇವಸ್ಥಾನವನ್ನು ನಿರ್ಮಿಸಲು ಆದೇಶವಾಯಿತು. ದೇವಸ್ಥಾನ ನಿರ್ಮಾಣವಾಯಿತು. ಅಂದಿನಿಂದಲೂ ಇದುವರೆಗೂ ರಾಜಮನೆತನದವರು ದೇವಸ್ಥಾನಕ್ಕೆ ನಡೆದುಕೊಳ್ಳುತ್ತಿದ್ದಾರೆ.

ಈ ದೇವಸ್ಥಾನದ ಇನ್ನೊಂದು ವಿಶೇಷವೆಂದರೆ ಈ ದೇವಸ್ಥಾನ ನಿರ್ಮಾಣವಾದುದು ಸೋನಾವಡೇಕರ ಎಂಬ ಒಂದೇ ಕುಟುಂಬದ ಜನರಿಂದ ನಾಲ್ಕು ಪೀಳಿಗೆಯ ಹಿಂದೆ. ಇದೇ ಮನೆತನದವರೇ ಇಂದು ಒಬ್ಬ ಪ್ರಸಿದ್ಧ ಮೂರ್ತಿಶಿಲ್ಪಕಾರರೆಂದೂ ಹೇಳಲು ಅಭಿಮಾನವಾಗುತ್ತಿದೆ, ಕನ್ಯಾಕುಮಾರಿಯಲ್ಲಿ ವಿವೇಕಾನಂದ ಸ್ಮಾರಕ ಶಿಲೆಯ ಮೇಲೆ ನಿಂತಿರುವ ಸುಂದರ ಭವ್ಯ ವಿವೇಕಾನಂದರ ಮೂರ್ತಿ ಸಿದ್ಧವಾದುದು ಈ ಮನೆತನದವರಾದ ಶ್ರೀ ಎಸ್. ಎಲ್. ಸೋನಾವಡೇಕರ ಅವರಿಂದಲೇ ಎಂಬುದು ಅಭಿಮಾನದ ಸಂಗತಿಯೇ, ಈ ಕುಟುಂಬದವರು ಕಲ್ಲನ್ನು ಕೆತ್ತುವರು, ಕಟ್ಟಿಗೆಯ ನಕ್ಷೆಯಂತೂ ಸರಿಯೇ, ಚಿತ್ರಕಾರರಂತು ಅಹುದೇ ಅಹುದು. ದಿನಮಾನ ಬದಲಾದಂತೆ ಇವರು ಊರುಬಿಟ್ಟು ಬೇರೆಡೆ ಹೋದರೂ ವಂಶಪರಂಪರಾಗತವಾಗಿ ಬಂದ ಕಲೆಯನ್ನು ಮಾತ್ರ ಕೈಬಿಟ್ಟಿಲ್ಲ.

ಈ ದೇವಸ್ಥಾನದಲ್ಲಿಯೇ ಚಿತಾರಿಗಳಿಂದ ನಿರ್ಮಿತವಾದ ಭಿತ್ತಿಚಿತ್ರಗಳಿವೆ. ಇವೆಲ್ಲ 18ನೇ ಶತಮಾನದಲ್ಲಿ ನಿರ್ಮಾಣವಾದವು. ಈ ಚಿತ್ರಗಳಿಗೆ ಬಳಸಿದ ವಿಷಯವೂ 'ಗಂಜಿಫಾ' ಎಲೆಯ ಮೇಲೆ ಉಪಯೋಗಿಸಿದ ಚಿತ್ರಗಳಿಗೆ ಭಿನ್ನವಾಗಿಲ್ಲ. ದಶಾವತಾರದ



ವಿಷಯವೇ ಇದೆ. ಇನ್ನು ಶೈಲಿಯ ಬಗ್ಗೆ ಹೇಳುವುದಾದರೆ, 'ಪೈಠಣ' ಕಿರುಚಿತ್ರ (Miniatuie) ಪರಂಪರೆಗೆ ಹೋಲುತ್ತವೆ. ಗಂಜೀಫಾ ಶೈಲಿಯು ಇದೆಯೇ, ಆದರೆ, ಇಂದು ಗಂಜೀಫಾ ಎಲೆಗಳನ್ನು ಚಿತ್ರಿಸಿದ ಇನ್ನೂ ಬದುಕಿ ಉಳಿದಿರುವ ಎಂಭತ್ತೈದು ವಯಸ್ಸಿನ ಶ್ರೀ ಪುಂಡಲೀಕ ಗೋವಿಂದ ಚಿತಾರಿಯವರ ಅಭಿಪ್ರಾಯದ ಮೇರೆಗೆ ಈ ಚಿತ್ರಗಳಲ್ಲಿ ಗಂಜೀಫಾದಲ್ಲಿರುತ್ತಿದ್ದ ಕುಶಲತೆ ಇಲ್ಲವೆಂದೂ, ಬಹುಶಃ ಈ ಚಿತ್ರಗಳು ಅಪಕ್ವ ಹಸ್ತಗಳಿಂದ ನಿರ್ಮಾಣವಾಗಿರಬೇಕೆಂದೂ ಅಭಿಪ್ರಾಯ ಪಡುತ್ತಾರೆ, ಗಂಜೀಫಾ ಚಿತ್ರಿಸುವ ಈ ಚಿತಾರಿಗಳಿಂದ, ಇಂಥ ಅನೇಕ ಭಿತ್ತಿಚಿತ್ರಗಳೂ ನಿರ್ಮಾಣವಾಗಿವೆ. ಈ ಲೇಖನದ ಜೊತೆಯಲ್ಲಿ ಅಚ್ಚಾದ ಭಿತ್ತಿಚಿತ್ರದ ಪ್ರತಿಕೃತಿಗಳೆಲ್ಲ 'ಆಕೇರಿ' ದೇವಸ್ಥಾನದಲ್ಲಿಯವು.

ಗಂಜೀಫಾ ಮರೆಯಾಗಿದೆ. ಇಂದು ಆ ಕಾರ್ಡುಗಳನ್ನು ಕಾಣಬೇಕಾದರೆ, ಯಾವುದೇ ವಸ್ತುಸಂಗ್ರಹಾಲಯದಲ್ಲಿ ಮಾತ್ರ ಇಲ್ಲವೇ ಯಾವುದಾದರೂ ಶ್ರೀಮಂತ ಇಲ್ಲವೇ ರಾಜಮನೆತನದಲ್ಲಿ ಮಾತ್ರ ಲಭ್ಯವಿರಬೇಕು. ಬಹುಶಃ ಶ್ರೀ ಪುಂಡಲೀಕ, ಗೋವಿಂದ ಚಿತಾರಿಯವರೆ, ಗಂಜೀಫಾ ಎಲೆಗಳನ್ನು ಚಿತ್ರಿಸಿದ ಕೊನೆಯ ಚಿತಾರಿಯಾಗಬಹುದು.

ವಯಸ್ಸು ಹಣ್ಣಾದರೂ ಪುಂಡಲೀಕ ಚಿತಾರಿಯವರು ಅಂದು ಈ ಗಂಜೀಫಾ ಎಲೆಗಳನ್ನು ಚಿತ್ರಿಸುತ್ತಿದ್ದಾಗಿನ, ಆ ಹುಮ್ಮಸ್ಸು, ಒಂದು ಶಿಸ್ತು, ಚಿತ್ರಕಲೆಯಲ್ಲಿಯ ಶ್ರದ್ಧೆಯನ್ನು ವರ್ಣಿಸುವಾಗ ಮೂವತ್ತು ವರುಷದ ತರುಣನ ರಕ್ತ ಅವರಲ್ಲಿ ಸಂಚಾರವಾಗುತ್ತದೆ. ನೀವು ದಶಾವತಾರ ಚಿತ್ರದ ವಿಷಯ ಹೇಗೆ ಯೋಚಿಸುತಿದ್ದೀರಿ? ಎಂದು ಯಾರೂ ಕೇಳುವುದೇ ತಡ, ದಶಾವತಾರದ ವಿಷಯ ಒಂದನ್ನು ನಡುಗುವ ಕೈಯಿಂದಲೇ ಗೀಚಿ ತೋರಿಸುತ್ತಾರೆ. ವಯಸ್ಸಿನಷ್ಟೇ ಪಕ್ವವಾದ ಅನುಭವದ, ಆ ಸಮಯದಲ್ಲಿ ತಾವು ಕಾರ್ಯ ಮಾಡುತ್ತಿದ್ದವರ ವಿಷಯ ಆ ನಡುಗುವ ಧ್ವನಿಯಲ್ಲಿ ಬಣ್ಣಿಸುತ್ತಾರೆ. 'ನೋಡಿ, ನಮ್ಮ ಕುಶಲತೆ ಬರೀ ಗಂಜೀಫಾ ಎಲೆಗಳನ್ನು ಚಿತ್ರಿಸುವಲ್ಲೆ ಮುಗಿಯಲಿಲ್ಲ, ಆ ಕಾರ್ಡುಗಳನ್ನಿಡಲು ಉತ್ಕೃಷ್ಟ ಕಟ್ಟಿಗೆಯ ಪೆಟ್ಟಿಗೆಗಳನ್ನು ನಿರ್ಮಿಸುತ್ತಿದ್ದೆವು. ನಮ್ಮ ಸುತ್ತಲ ಅರಣ್ಯದಲ್ಲಿಯೇ ವಿವಿಧ ರೀತಿಯ ಗಿಡಗಳಿವೆ. ಆಯಾ ಕೆಲಸಕ್ಕೆಂದು ಬೇರೆ ಕಟ್ಟಿಗೆಯ ಉಪಯೋಗ ಮಾಡುತ್ತೇವೆ. ಈ ಪೆಟ್ಟಿಗೆಗಳನ್ನು ನಿರ್ಮಿಸಲೆಂದೇ ಒಂದು ವಿಶಿಷ್ಟ ಮರದ ಕಟ್ಟಿಗೆ ಉಪಯೋಗವಾಗುತ್ತದೆ, ಈ ಪೆಟ್ಟಿಗೆ ಕೆಲಸಲ ಕೆತ್ತನೆಯ ನಕ್ಷೆಯಿಂದ ತುಂಬಿರುತ್ತಿತ್ತು. ಅಲ್ಲದೇ ಅರಗಿನ ಬಣ್ಣಗಳಿಂದ ವಿವಿಧ ವರ್ಣಗಳಲ್ಲಿ ನಕ್ಷೆಯಿಂದ ತುಂಬಿದ್ದು ಕಣ್ಣು ಮಿಂಚುವಷ್ಟು ಹೊಳೆಯುತ್ತಿತ್ತು, ಅಂದು ಗಂಜೀಫಾ ಚಿತ್ರಣ ಮನೆಯಲ್ಲಿಯ ಹಿರಿಯರಿಂದ ಕಿರಿಯರ ವರೆಗೆ ಎಲ್ಲರನ್ನೂ ಉದ್ಯೋಗದಲ್ಲಿ ತೊಡಗಿಸುತ್ತಿತ್ತು.'



ದೇವಾಲಯದ ಒಳಗಿನ ಕಲ್ಲಿನ ಕಂಬ.

ಚಿತ್ರ : ಪ್ರಾ। ಪರೇಶ ದರು

# ಗಂಜೀಫಾ ಎಲೆಗಳು










'ಗಂಜೀಫಾ' ಎಲೆಗಳಲ್ಲಿ' ದಶಾವತಾರ' ವಿಷಯ ಒಂದು ಮುಖ್ಯವಾದುದು. ಎಂಬುದು ಈ ಎಲೆಗಳ ನಿರ್ಮಾಣಗಳ ಕೇಂದ್ರಗಳಿಂದ ತಿಳಿದುಬರುವ ಮಾತು. ಇವನ್ನು ನಿರ್ಮಿಸುವ ಕೇಂದ್ರ, ಪ್ರದೇಶಗಳು ಬದಲಾದಂತೆ ಈ ಚಿತ್ರಗಳಲ್ಲಿಯ ಶೈಲಿಯಲ್ಲೂ ವಿವಿಧತೆ ಕಂಡುಬರುತ್ತದೆ. ಕಾಲ ಬದಲಾದಂತೆ ಆಟದ ರೀತಿಯ ಮಾರ್ಪಾಡು ಕಂಡಿದೆ.

ಇತಿಹಾಸ ತಜ್ಞರು ಹೇಳುವ ಪ್ರಕಾರ ದೊಡ್ಡ ವರ್ತುಲ ಆಕೃತಿಯ ಬಿಷ್ಣುಪುರದ 'ಮಲ್ಲ' ರಾಜರ ಕಾಲದಲ್ಲಿಯ 8ನೇ ಶತಮಾನದ ಕಾರ್ಡುಗಳೇ ತೀರ ಮೊದಲು ಸಿದ್ಧವಾಗಿದ್ದವಿರಬೇಕೆಂದು ಅಭಿಪ್ರಾಯಪಡುತ್ತಾರೆ. ಇದೇ ಸತ್ಯವೆಂದರೆ ಗಂಜೀಫಾ ದಶಾವತಾರ ಆಟವೇ ಪ್ರಥಮ ಹಿಂದು ಜನರ ಎಲೆ ಆಟವೆಂದು ನಂಬಬಹುದು.

ಗಂಜೀಫಾದಲ್ಲಿ 'ನವಗ್ರಹ' ವಿಷಯದ ಮೇಲೆ ಅವಲಂಬಿಸಿದ ಚಿತ್ರಗಳಿಂದ ಕೂಡಿದ ಕಾರ್ಡುಗಳು ಇದ್ದವೆಂದು 1867ರಲ್ಲಿ ಪ್ರಕಟವಾದ ಪುಸ್ತಕದಿಂದ ತಿಳಿದುಬರುತ್ತದೆ.

ಭಾರತಭೂಮಿಯ ಮೇಲೆ ಮುಸಲ್ಮಾನರು ಬಂದು ರಾಜ್ಯ ನಡೆಸಿದ ಕಾಲದಲ್ಲಿ ಈ ಗಂಜೀಫಾ ಆಟದಲ್ಲಿ ದಶಾವತಾರ ಅಥವಾ ಹಿಂದು ವಿಷಯವಲ್ಲದೇ ಬೇರೆ ವಿಷಯಗಳನ್ನು ಅಳವಡಿಸಿದ ಗಂಜೀಫಾ ಎಲೆಗಳೂ ಇವೆಯೆಂದು ನಂಬುಗೆ ಇದೆ: ಅಲ್ಲದೇ ಆಟದ. ರೀತಿಯಲ್ಲಿ ತಮಗೆ ಬೇಕಾದಂತೆ ಬದಲಿಸಿಕೊಂಡದ್ದುಂಟು.

ಶ್ರೀ ಆರ್. ಎಂಡ್ ಎನ್. ವಾನ್ ಲೇಡನ್ನರು, playing cards in India ಎಂಬ ತಮ್ಮ ಅಭ್ಯಾಸಪೂರ್ಣ ಸಚಿತ್ರ ಲೇಖನದಲ್ಲಿ ಗಂಜೀಫಾ ಆಟದ ವಿಷಯವಾಗಿಯೂ ಸವಿಸ್ತಾರವಾಗಿ ಬರೆದಿದ್ದಾರೆ.

# ಗಂಜೀಫಾ ಆಡುವ ರೀತಿ















ಗಂಜೀಫಾದಲ್ಲಿ ಅನೇಕ ರೀತಿಗಳಿವೆ. ಅವುಗಳಲ್ಲಿ (1) ದಶಾವತಾರ; (2) ನವಗ್ರಹ; (3) ಚಂಗ ಕಾಂಚನ (ಮೊಗಲ); (4) ಕಡಪ್ಪಾ; (5) ಮೈಸೂರ ದೇವಿ. ಅಲ್ಲದೇ 'ಮೂಲಾಕ್ಷರ ಗಂಜೀಫಾ ಪ್ರಚಲಿತವಿದ್ದವು.

ಸಾವಂತವಾಡಿಯ ಗಂಜೀಫಾ 'ದಶಾವತಾರ' ವಿಷಯದ ಮೇಲೆಯೇ ಆಧಾರಿತವಾದುವು. ಪ್ರತಿ ಅವತಾರದ ಹನ್ನೆರಡು ಎಲೆಗಳು ಇದ್ದು ಒಟ್ಟಿನಲ್ಲಿ ನೂರಿಪ್ಪತ್ತು ಎಲೆಗಳಿರುತ್ತವೆ. ಹನ್ನೆರಡು ಎಲೆಗಳಲ್ಲಿ ಒಂದು ಮುಖ್ಯ ಎಲೆ ಇನ್ನೊಂದು ಉಪಮುಖ್ಯ ಎಲೆ(ವಝೀರ) ಹಾಗೂ ಗುಣಾನುಕ್ರಮವಾಗಿ ಬೇರೆ ಹತ್ತು ಎಲೆಗಳು ಇರುವುವು. ಕಡಿಮೆಯೆಂದರೆ ಮೂವರು ವ್ಯಕ್ತಿಗಳು ಕುಳಿತು ಇದನ್ನು ಆಡುವುದು.

ಗುಣಾನುಕ್ರಮದಲ್ಲಿ ಮೊದಲಿನ 5 ಎಲೆಗಳಿಗೆ ಹೆಚ್ಚಿನ ಗುಣಗಳುಂಟು. ಮೊದಲಿನ 5 ಗುಂಪಿನಲ್ಲಿ ಇಲ್ಲಿ ಒಂದಕ್ಕೆ ಕಡಿಮೆ ಗುಣ: 10ಕ್ಕೆ ಹೆಚ್ಚು ಗುಣಗಳು. ಇದೇ ಎರಡನೇ ಐದರ ಗುಂಪಿನಲ್ಲಿ ಎಣಿಕೆ ವಿರುದ್ಧವಾಗುತ್ತದೆ. ಇಲ್ಲಿ ಒಂದಕ್ಕೇ ಹೆಚ್ಚಿನ ಗುಣಗಳು.

ಹಗಲು ಆಡುವಾಗ ಮುಖ್ಯ ಎಲೆ 'ರಾಮಾವತಾರ' ಇಲ್ಲವೇ 'ನರಸಿಂಹ' ಅವತಾರಕ್ಕೆ ಸಂಬಂಧಿಸಿದ್ದಾಗಿದ್ದರೆ, ಇರುಳಲ್ಲಿ ಆಡುವಾಗ ಕೃಷ್ಣಾವತಾರಕ್ಕೆ ಸಂಬಂಧಿಸಿದ್ದೇ ಮುಖ್ಯ ಎಲೆಯಾಗುತ್ತದೆ.

ಗಂಜೀಫಾ ಆಟ ಕರ್ನಾಟಕ, ಆಂಧ್ರ, ತಮಿಳು ನಾಡುಗಳಲ್ಲಿಯ ಕೆಲಭಾಗಗಳಲ್ಲಿ ಆಡುತ್ತಿದ್ದುದಾಗಿ ತಿಳಿಯುತ್ತದೆ, ಇಲ್ಲಿಯೂ ಈ ಎಲೆಗಳು ನಿರ್ಮಾಣವಾಗುತ್ತಿದ್ದುವು.



→ ರಥದ ಕುದುರೆ; ಕಟ್ಟಿಗೆಯ ಕೆತ್ತನೆ.

ಚಿತ್ರ: ಶ್ರೀ ಪಾಲ್ ಕೋಲಿ

ಇಂದು ದಿನಮಾನ ಬದಲಾಗಿದೆ, ಗಂಜೀಫಾ ಕಾರ್ಡು ಚಿತ್ರಿಸಿ ಈ ಚಿತಾರಿಗಳು ಬದುಕುವಂತಿಲ್ಲ. ಈ ಮಧ್ಯ, ಸಾವಂತವಾಡಿಯ ಶಿವರಾಮ ರಾಜಾ ಭೋನ್‌ಸಲೆ ಈ ಚಿತ್ರಕಲೆ ಮಾಯವಾಗಬಾರದು, ಚಿತಾರಿಗಳೂ ಉಳಿಯಬೇಕೆಂದು, ಕೆಲಕಾಲ ಇಸ್ಪೀಟು (Playing Cards) ಗಳನ್ನೇ ಚಿತ್ರಿಸಿ, ನಿರ್ಮಾಣಕ್ಕೆ ಎಡೆಮಾಡಿಕೊಟ್ಟ ಪ್ರಸಂಗವೂ ಉಂಟು. ಸದ್ಯದ ಕಾಲದಲ್ಲಿ ಈ ಚಿತಾರಿಗಳ ಒಲವು ಬೇರೆಯೇ ಆಗಿದೆ. ಇಂದು ಅವರು, ಅರಗಿನ ಬಣ್ಣದ ಫರ್ನಿಚರು ತಯಾರಿಸುತ್ತಾರೆ. ಕಟ್ಟಿಗೆ ಆಟಿಕೆಗಳನ್ನು ಸಿದ್ಧ ಮಾಡುತ್ತಾರೆ. ಇದಕ್ಕೆಲ್ಲ ರಾಜಾ ಭೋನ್ಸಲೆಯವರ ಪ್ರೋತ್ಸಾಹನ ಧಾರೆಯಾಗಿ ಪೋಷಿಸಿದೆಯೆಂದೇ ಈ ಚಿತಾರಿಗಳು ಬದುಕಿದ್ದಾರೆ; ಕಲೆಯೂ ಉಳಿದು ಬಂದಿದೆ.

← ಆಕೇರಿ ದೇವಾಲಯದ ಕಟ್ಟಿಗೆಯ ರಥ: ಚಿತಾರಿಗಳ ಕಲಾಕೃತಿ.

ಚಿತ್ರ: ಪ್ರಾ। ಪರೇಶ ದರು

ಇಂದು ಸಾವಂತವಾಡಿಯ 'ಚಿತಾರಿ ಆಳಿ'ಯಲ್ಲಿ ಸುಳಿದರೆ ಸಾಕು ಎಲ್ಲ ಕೈಗಳೂ ಕೆಲಸದಲ್ಲಿ ತೊಡಗಿರುವುದನ್ನು ಕಾಣುತ್ತೇವೆ. ಹಿರಿಯರು ಕಟ್ಟಿಗೆಯನ್ನು ಗಾಡದಲ್ಲಿ (lathe) ಹಿಡಿದು ತಿರುಗಿಸಿ ವಿವಿಧ ರೂಪವನ್ನು ಕೊಡುತ್ತಿದ್ದರೆ, ಮಹಿಳೆಯರು ಬಣ್ಣ ಬಳಿಯುತ್ತಿರುತ್ತಾರೆ. ಮಕ್ಕಳು ಓಣಿಯಲ್ಲಿ ಅವನ್ನು ಓರಣವಾಗಿಟ್ಟು ಒಣಗಿಸುತ್ತಿರುತ್ತಾರೆ, ಹೀಗೆ ಮನೆಯಲ್ಲಿಯ ಎಲ್ಲರೂ ಒಂದಲ್ಲೊಂದು ಕೆಲಸದಲ್ಲಿ ತೊಡಗಿರುತ್ತಾರೆ. ಇಂದು ಈ ಆಟಿಕೆ ಫರ್ನಿಚರುಗಳಿಗೆ ದೇಶದಲ್ಲಿ, ವಿದೇಶದಲ್ಲಿ ಬೇಡಿಕೆಯಿದೆ. ಇದನ್ನೆಲ್ಲ ಮಾಡಿದವರು ಸಾವಂತವಾಡಿಯ ರಾಜಾ ಭೋನ್ಸಲೆಯವರು, ಅವರ ರಾಜವಾಡೆಯೇ ಈ

→ ದೇವಸ್ಥಾನದ ಕಟ್ಟಿಗೆಯ ಕೆತ್ತನೆಯ ಮಾದರಿ.

ಚಿತ್ರ: ಪ್ರಾ। ಪರೇಶ ದರು



ಚಿತಾರಿಗಳಿಗೆ ಹಿಂದಿನಿಂದ ಇಂದಿನವರೆಗೂ ಪ್ರೋತ್ಸಾಹ ನೀಡಿದೆ. ಇಂದು ರಾಜವಾಡೆಯ ಕೆಲ ಭಾಗ ಚಿತಾರಿಗಳ ಕಾರಖಾನೆಯಾಗಿ ಮಾರ್ಪಟ್ಟಿದೆ ಎಂದರೆ ಆಶ್ಚರ್ಯವಾದೀತು.

'ಗಂಜಿಫಾ' ಆಟ ಇಂದಿಲ್ಲ ನಿಜ; ಆದರೆ ಗಂಜಿಫಾ ವಿಷಯ ಬಂದರೆ, ಸಾವಂತವಾಡಿಯ ಹೆಸರೆತ್ತಬೇಕು. ಸಾವಂತವಾಡಿ ಎಂದೊಡನೆಯೇ 'ಚಿತಾರಿ'ಗಳ ನೆನಪು ತಾನಾಗಿಯೇ ಬರುತ್ತದೆ. ಇಲ್ಲಿಯ ರಾಜಮನೆತನ ಇಂದಿಗೂ ಪ್ರೋತ್ಸಾಹ ನೀಡುತ್ತಿದೆ. ಚಿತಾರಿಗಳ ಬದುಕಿನ ಬಗೆಗೆ ಯಾವಾಗಲೂ ಕಳವಳ ಪಡುತ್ತಿದೆ. ಈ ಅರಮನೆಯಲ್ಲಿಯೇ, ನಾನಾಫಡಣವೀಸನು ಈ ರಾಜರಿಗೆ ಬರೆದ ಒಂದು ಪತ್ರವಿದೆ. ಈ ರಾಜರು ಫಡಣವೀಸನಿಗೆ "ಗಂಜೀಫಾ" ಎಲೆಗಳನ್ನು ಕಳುಹಿದ್ದಕ್ಕೆ ಉತ್ತರವಾಗಿ ಬರೆದ ಕಾಗದವದು. ಈ ಚಿತಾರಿಗಳ ಕೃತಿಯನ್ನು ಹೊಗಳಿದ್ದನ್ನು ನೋಡಿದರೆ ಅವು ಎಷ್ಟು ಸುಂದರವಾಗಿದ್ದುವೆಂಬುದರ ಅರಿವು ಬರುತ್ತದೆ.

ಮರದ ಕಂಬದಲ್ಲಿ ಕೊರೆದ ನಕ್ಷೆ.
ಚಿತ್ರ: ಎನ್. ಬಿ. ಸಾಬಣ್ಣವರ

ದೇವಾಲಯದ ಭಿತ್ತಿಚಿತ್ರಗಳು.
ಚಿತ್ರ: ಪ್ರಾ। ಪರೇಶ್ ದರು





'ಪಾಂಗೇರಿ' ಎಂಬ ಜಾತಿಯ ಕಟ್ಟಿಗೆಯಿಂದ ರಚಿತವಾದ ಹಣ್ಣುಗಳು, ಹುಣಸೆ ಬೀಜ ಮತ್ತು 'ಕಾಡು' ಎಂಬ ಮಣ್ಣಿನ ಮಿಶ್ರಣದಿಂದ ಬಣ್ಣದ ಲೇಪ. ಈ ಆಟಿಗೆ ಪರದೇಶದ ಮಾರುಕಟ್ಟೆಯನ್ನು ಕಾಣಲು ಅಣಿಯಾಗುತ್ತಿದೆ.

ಚಿತ್ರ : ಪ್ರಾ ಪರೇಶ ದರು

## ಕೃತಜ್ಞತೆಗಳು

ಸಾವಂತವಾಡಿಯ ಚಿತಾರಿಗಳ ಬಗ್ಗೆ ಬರೆಯಬೇಕು ಅದಕ್ಕಾಗಿಯೇ ಅಲ್ಲಿಗೆ ಹೋಗಬೇಕು ಎಂದು ಯೋಚಿಸುತ್ತಿರುವಾಗಲೇ ಸರ್ ಜೆ. ಜೆ. ಸ್ಕೂಲ್ ಆಫ್ ಆರ್ಟಿನಲ್ಲಿಯ ನನ್ನ ಸ್ನೇಹಿತ ಪ್ರಾಧ್ಯಾಪಕರಾದ ಪ್ರೊ। ವ್ಹಿ. ಎಂ. ಸೋಲಾಪುರಕರ ಹಾಗೂ ಪ್ರಾ। ಎನ್. ಬಿ. ಸಾಬಣ್ಣವರ ಇವರು ಅಲ್ಲಿಗೆ ಕೆಲ ಛಾಯಾಕಾರ ಸ್ನೇಹಿತರೊಂದಿಗೆ ಹೋಗಿ ಚಿತಾರಿಗಳ ಬಗ್ಗೆ ವಿವರವಾಗಿ ಪೂರ್ಣ ಅಭ್ಯಾಸ ಮಾಡಿ ಬಂದುದು ತಿಳಿಯಿತು. ನಾನು ಯೋಜಿಸಿದ ಲೇಖನದ ಬಗ್ಗೆ ಕೇಳಿದೊಡನೆಯೇ ನನಗೆ ಎಲ್ಲ ರೀತಿಯ ಸಹಾಯ ಮಾಡಿ, ಸಂಬಂಧಿಸಿದ ಚಿತ್ರಗಳನ್ನು ಒದಗಿಸಿದ್ದಕ್ಕೆ ನಾನು ಅವರಿಗೆ ಅತ್ಯಂತ ಉಪಕೃತನಾಗಿದ್ದೇನೆ. ಅವರಿಬ್ಬರೂ ಕನ್ನಡಿಗರೇ ಎಂಬುದು ಇನ್ನೊಂದು ಅಭಿಮಾನದ ಸಂಗತಿ.

ಈ ಕಲಾಶಾಲೆಯಿಂದ ಹೊರಡುವ ವಾರ್ಷಿಕ ಪತ್ರಿಕೆ 'ರೂಪಭೇದ'ವನ್ನು ಶ್ರೀ ಸೋಲಾಪುರಕರ ಸಂಪಾದಿಸುತ್ತಾರೆ. ಈ ವರ್ಷದ ಪತ್ರಿಕೆ ಸಾವಂತವಾಡಿಯ ಚಿತಾರಿಗಳ ಬಗ್ಗೆಯೇ ವಿಶೇಷ ಲೇಖನಗಳನ್ನು ಹೊತ್ತು ಕಲಾಪೂರ್ಣವಾಗಿ ಹೊರಬಿದ್ದಿದೆ.

ಈ ಲೇಖನ ಪ್ರಕಟಿಸಲು ಚಿತ್ರಗಳನ್ನು ಉಪಯೋಗಿಸಲು ಅನುಮತಿ ನೀಡಿದ ಜೆ. ಜೆ. ಕಲಾಶಾಲೆಯ 'ಡೀನ'ರಾಗಿರುವ ಶ್ರೀ ಕದಮರಿಗೂ ನಾನು ಕೃತಜ್ಞನಾಗಿರುವೆ.

